# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1654
ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 20-03-2020

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯ ರಸ್ತೆ ಸಾರಿಗೆ ನಿಗಮವು ಸಾರ್ವಜನಿಕರಿಗೆ ಪರಿಣಾಮಕಾರಿಯಾಗಿ ಸೇವೆಯನ್ನು ಒದಗಿಸುವ ಹಿನ್ನೆಲೆಯಲ್ಲಿ ನಾಲ್ಕು ವಿಭಾಗಗಳನ್ನು ಮಾಡಿದ್ದರೂ ಈವರೆಗೂ ನಿರೀಕ್ಷಿತ ಫಲಿತಾಂಶ ಬಂದಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ವಿವರ ನೀಡುವುದು; | ರಾಜ್ಯದ ಸಾರ್ವಜನಿಕ ಸಾರಿಗೆ ಪ್ರಯಾಣಿಕರ ಅವಶ್ಯಕತೆಗೆ ಅನುಗುಣವಾಗಿ ಪರಿಣಾಮಕಾರಿ ಹಾಗೂ ದಕ್ಷತೆಯಿಂದ ಕಾರ್ಯ ನಿರ್ವಹಿಸಲು ಅನುವಾಗುವಂತೆ ಮಾಡಲು ಸರ್ಕಾರವು ಕ.ರಾ.ರ.ಸಾ.ನಿಗಮವನ್ನು ವಿಭಜಿಸಿ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ಈಶಾನ್ಯ ಕರ್ನಾಟಕ ಸಾರಿಗೆ ಸಂಸ್ಥೆ ಮತ್ತು ವಾಯುವ್ಯ ಕರ್ನಾಟಕ ಸಾರಿಗೆ ಸಂಸ್ಥೆ ಪ್ರತ್ಯೇಕ ನಿಗಮಗಳನ್ನು ರಸ್ತೆ ಸಾರಿಗೆ ನಿಗಮದ ಕಾಯಿದೆ 1950 ರ ಸೆಕ್ಷನ್ 3 ರನ್ವಯ ಸ್ಥಾಪಿಸಿರುತ್ತವೆ.<br><br>ಕ.ರಾ.ರ.ಸಾ.ನಿಗಮವನ್ನು ನಾಲ್ಕು ಸಂಸ್ಥೆಗಳನ್ನಾಗಿ ವಿಭಜಿಸಿದ ಧ್ಯೇಯೋಧೇಶಗಳನ್ನು ಸಾಧಿಸಿರುವುದಕ್ಕೆ ಸಂಬಂಧಿಸಿದಂತೆ ವಿವರಗಳನ್ನು **"ಅನುಬಂಧ"** ದಲ್ಲಿ ನೀಡಲಾಗಿದೆ. |
| ಆ | ಕರ್ನಾಟಕ ರಸ್ತೆ ಸಾರಿಗೆ ನಿಗಮದಲ್ಲಿ ಒಟ್ಟು ಇರುವ ವಾಹನಗಳ ಸಂಖ್ಯೆ ಎಷ್ಟು; (ವಿಭಾಗವಾರು ವಿವರ ನೀಡುವುದು) | ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದಲ್ಲಿ ಒಟ್ಟು 16 ಕಾರ್ಯಾಚರಣೆ ವಿಭಾಗಗಳಿದ್ದು, ವಾಹನಗಳ ಸಂಖ್ಯೆಯ ವಿವರ ಈ ಕೆಳಕಂಡಂತಿರುತ್ತದೆ: |

| ಕ್ರಮ ಸಂ. | ವಿಭಾಗ | ವಾಹನಗಳ ಸಂಖ್ಯೆ |
|---|---|---|
| 1 | ಬೆಂಗಳೂರು ಕೇಂದ್ರೀಯ | 739 |
| 2 | ರಾಮನಗರ | 528 |
| 3 | ತುಮಕೂರು | 642 |
| 4 | ಕೋಲಾರ | 574 |
| 5 | ಚಿಕ್ಕಬಳ್ಳಾಪುರ | 604 |
| 6 | ಮೈಸೂರು ನಗರ | 448 |
| 7 | ಮೈಸೂರು ಗ್ರಾಮಾಂತರ | ·710 |
| 8 | ಮಂಡ್ಯ | 477 |
| 9 | ಚಾಮರಾಜನಗರ | 567 |
| 10 | ಹಾಸನ | 578 |
| 11 | ಚಿಕ್ಕಮಗಳೂರು | 578 |
| 12 | ಮಂಗಳೂರು | 608 |
| 13 | ಪುತ್ತೂರು | 589 |
| 14 | ದಾವಣಗೆರೆ | 360 |
| 15 | ಶಿವಮೊಗ್ಗ | 349 |
| 16 | ಚಿತ್ರದುರ್ಗ | 285 |
| | ಒಟ್ಟು | **8636** |

| | | |
|---|---|---|
| ಇ | ಈ ವಾಹನಗಳನ್ನು ಖರೀದಿಸಿದ ಎಷ್ಟು ವರ್ಷಗಳ ಅವಧಿಯ ನಂತರ ಸ್ಕ್ರ್ಯಾಪ್ (Scrap) ಮಾಡಲಾಗುವುದು; | ಕ.ರಾ.ರ.ಸಾ ನಿಗಮದಲ್ಲಿ ವಾಹನಗಳನ್ನು ನಿಷ್ಕ್ರಿಯಗೊಳಿಸಲು ಕೆಳಗಿನಂತೆ ಮಾನದಂಡಗಳನ್ನು ಅನುಸರಿಸಲಾಗುತ್ತಿರುತ್ತದೆ:<br>• ಸಾಮಾನ್ಯ/ ನಾನ್ ಎ.ಸಿ ಮಾದರಿ ವಾಹನಗಳು 9.0 ಲಕ್ಷ ಸವಕಳಿ ಕಿ.ಮೀ. ಕ್ರಮಿಸಿದ ನಂತರ ನಿರುಪಯುಕ್ತಗೊಳಿಸಲು ಅನುಮತಿ ನೀಡಲಾಗುತ್ತಿರುತ್ತದೆ.<br>• ಕರೋನಾ ಸ್ಲೀಪರ್ ವಾಹನಗಳು 11.0 ಲಕ್ಷ ಸವಕಳಿ ಕಿ.ಮೀ. ಕ್ರಮಿಸಿದ ನಂತರ ನಿರುಪಯುಕ್ತಗೊಳಿಸಲು ಅನುಮತಿ ನೀಡಲಾಗುತ್ತಿರುತ್ತದೆ.<br>• ಪ್ರತಿಷ್ಠಿತ ವಾಹನಗಳಾದ ವೋಲ್ವೋ, ಸ್ಕ್ಯಾನಿಯಾ, ಮರ್ಸಿಡಿಸ್ ಬೆಂಜ್ ವಾಹನಗಳು 13.0 ಲಕ್ಷ ಸವಕಳಿ ಕಿ.ಮೀ. ಕ್ರಮಿಸಿದ ನಂತರ ನಿರುಪಯುಕ್ತಗೊಳಿಸಲು ಅನುಮತಿ ನೀಡಲಾಗುತ್ತಿರುತ್ತದೆ.<br>ಅಂತೆಯೇ, ವಾಹನಗಳ ಭೌತಿಕ ಹಾಗೂ ತಾಂತ್ರಿಕ ಸ್ಥಿತಿಗತಿಗಳನ್ನಾಧರಿಸಿ ಬಸ್ಸುಗಳನ್ನು ನಿಷ್ಕ್ರಿಯಗೊಳಿಸಲು ಅನುಮತಿಸಲಾಗುತ್ತಿರುತ್ತದೆ. |
| ಈ | ಸದರಿ ವಾಹನಗಳ ಸಂಚಲನಕ್ಕೆ ಪ್ರತಿ. ಕಿಮೀಗೆ ತಗಲುವ ವೆಚ್ಚವೆಷ್ಟು? | ಪ್ರಸ್ತುತ ವಾಹನಗಳ ಸಂಚಲನಕ್ಕೆ ಪ್ರತಿ ಕಿ.ಮೀ.ಗೆ ಸರಾಸರಿ ರೂ.36.41 ರಷ್ಟು ವೆಚ್ಚ ತಗಲುತ್ತದೆ. |

ಸಂಖ್ಯೆ: ಟಿಡಿ 124 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

## ಅನುಬಂಧ – 1

### ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಉಗಮ ಮತ್ತು ಬೆಳವಣಿಗೆ

ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು 1961 ರಂದು ಅಸ್ತಿತ್ವಕ್ಕೆ ಬಂದಿತು. ನಿಗಮದ ಪ್ರಮುಖ ಉದ್ದೇಶ ಸಮರ್ಥ, ಮಿತವ್ಯಯಕಾರಿ, ಅಗತ್ಯತೆಗನುಗುಣವಾಗಿ ಹಾಗೂ ಸೂಕ್ತ ಸಮನ್ವಯತೆಯಿಂದ ಕೂಡಿರುವ ಸೇವೆಗಳನ್ನು ಒದಗಿಸುವುದಾಗಿದ್ದು, ಇದು ಸಾರಿಗೆಯುಕ್ತ ಸಂಸ್ಥೆಯಾಗಿದ್ದು ಸೇವೆಗಳನ್ನು ವ್ಯಾವಹಾರಿಕ ತತ್ವಗಳನ್ನಾಧರಿಸಿ ಕಾರ್ಯಾಚರಣೆ ಮಾಡುತ್ತಿದೆ. ಇದು ಸೇವಾಧಾರಿತ ಸಂಸ್ಥೆಯಾಗಿದ್ದು, ಲಾಭಾದಾರಿತ ಸಂಸ್ಥೆಯಾಗಿರುವುದಿಲ್ಲ.

ವಿವಿಧ ಕ್ಷೇತ್ರಗಳಲ್ಲಿ ಕರ್ನಾಟಕವು ಸಾಧಿಸಿದ ತ್ವರಿತ ಅಭಿವೃದ್ಧಿಯ ಹಿನ್ನೆಲೆಯಲ್ಲಿ, ಕ.ರಾ.ರ.ಸಾ. ಸಂಸ್ಥೆಯು ಕನ್ನಡಿಗರ ಮತ್ತು ನೆರೆಯ ರಾಜ್ಯದವರ ಸಾರಿಗೆ ಬೇಡಿಕೆಗಳನ್ನು ಈಡೇರಿಸಲು ಅತ್ಯುತ್ತಮ ಸಂಸ್ಥೆಯಾಗಿ ರೂಪುಗೊಂಡಿತು. ದಿನಾಂಕ 31-03-1997ರ ಅಂತ್ಯಕ್ಕೆ, ಏಕೀಕೃತ ಸಂಸ್ಥೆಯು 19 ವಿಭಾಗಗಳಲ್ಲಿ ಕಾರ್ಯಾಚರಿಸುತ್ತಿತ್ತು. ಅವುಗಳಲ್ಲಿ 17 ವಿಭಾಗಗಳು ಗ್ರಾಮಾಂತರ ಸಾರಿಗೆ ವಿಭಾಗಗಳಾಗಿದ್ದು ಎರಡು ವಿಭಾಗಗಳು ಬೆಂಗಳೂರಿನಲ್ಲಿ ನಗರ ಸಾರಿಗೆ ಕಾರ್ಯಾಚರಣೆ ವಿಭಾಗಗಳಾಗಿತ್ತು. 108 ಘಟಕಗಳು, 2 ಪ್ರಾದೇಶಿಕ ಕಾರ್ಯಾಗಾರಗಳು ಮತ್ತು ಬೆಂಗಳೂರಿನಲ್ಲಿ ಒಂದು ಕೇಂದ್ರ ಕಚೇರಿಯನ್ನು ಹೊಂದಿತ್ತು. 281 ಖಾಯಂ ಮತ್ತು 11 ತಾತ್ಕಾಲಿಕ ಬಸ್ ನಿಲ್ದಾಣಗಳು ಹೊಂದಿತ್ತು. 59033 ಸಿಬ್ಬಂದಿಯನ್ನು ಹೊಂದಿದ್ದು, ಪ್ರತಿ ಅನುಸೂಚಿಗೆ ಸಿಬ್ಬಂದಿ ಪ್ರಮಾಣ 6.22ರಷ್ಟಿತ್ತು. 9493 ಅನುಸೂಚಿಗಳನ್ನು 13273 ಮಾರ್ಗಗಳಲ್ಲಿ ಕಾರ್ಯಾಚರಿಸಲಾಗುತ್ತಿತ್ತು. ಹಾಗೂ ಸರಾಸರಿ ದೈನಂದಿನ ಪರಿಣಾಮಕಾರಿ ಕಿ.ಮೀ.ಗಳು 27.95 ಲಕ್ಷವಾಗಿತ್ತು. ಅಂತರರಾಜ್ಯ ಮಾರ್ಗಗಳಲ್ಲಿ ಸಂಸ್ಥೆಯು ಪರಸ್ಪರ ಒಪ್ಪಂದದ ಮೇಲೆ ನೆರೆಯ ರಾಜ್ಯಗಳಿಗೆ ಕಾರ್ಯಾಚರಿಸಲಾಗುತ್ತಿತ್ತು. ಒಟ್ಟು 10476 ವಾಹನಗಳನ್ನು ಹೊಂದಿದ್ದು, ಸರಾಸರಿ ವಾಹನ ಉಪಯುಕ್ತತೆ 299.6 ಕಿ.ಮೀ.ಗಳಾಗಿತ್ತು. ಪ್ರತಿ ದಿನ ಸರಾಸರಿ 57.82 ಲಕ್ಷ ಪ್ರಯಾಣಿಕರನ್ನು ಕೊಂಡೊಯ್ಯಲಾಗುತ್ತಿತ್ತು.

ಕಾರ್ಯಾಚರಣೆ ದಕ್ಷತೆಯನ್ನು ಸುಧಾರಿಸಲು, ಪ್ರಯಾಣಿಕರಿಗೆ ಉತ್ತಮ ಗುಣಮಟ್ಟದ ಸೇವೆಯನ್ನು ಒದಗಿಸಲು ಮತ್ತು ಕಾರ್ಯಾಚರಣೆಯ ಮೇಲೆ ಪರಿಣಾಮಕಾರಿ ಮೇಲ್ವಿಚಾರಣೆಯನ್ನು ಹೊಂದಲು, ಕರ್ನಾಟಕ ಸರ್ಕಾರವು ಸಂಸ್ಥೆಯನ್ನು ನಾಲ್ಕು ಪ್ರತ್ಯೇಕ ಸಂಸ್ಥೆಗಳನ್ನಾಗಿ ವಿಭಜಿಸಲು ಆದೇಶ ಸಂಖ್ಯೆ ಹೆಚ್‌ಟಿಡಿ 127/ಟಿಆರ್‌ಎ/96 ದಿನಾಂಕ 22-02-1997 ಅನ್ನು ಹೊರಡಿಸಿತು.

1996-97ರವರೆಗೆ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು ಅವಿಭಜಿತ/ಏಕೀಕೃತ ಸಂಸ್ಥೆಯಾಗಿ ಆಗಿತ್ತು. 1997-98ನೇ ಸಾಲಿನಲ್ಲಿ, ರಾಜ್ಯ ಸರ್ಕಾರವು ಕ.ರಾ.ರ.ಸಾ.ಸಂಸ್ಥೆಯಿಂದ ಎರಡು ಹೊಸ ಸಂಸ್ಥೆಗಳನ್ನು ಬೇರ್ಪಡಿಸಿ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ಮತ್ತು ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ ಇವುಗಳನ್ನು ಹೊಸದಾಗಿ ಪ್ರಾರಂಭಿಸಿದೆ. ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯ ಕೇಂದ್ರ ಕಚೇರಿಯು ಬೆಂಗಳೂರಿನಲ್ಲಿ ಮತ್ತು ವಾ.ಕ.ರ.ಸಾ.ಸಂಸ್ಥೆ ಕೇಂದ್ರ ಕಚೇರಿಯು ಹುಬ್ಬಳ್ಳಿಯಲ್ಲಿರುತ್ತದೆ. ಬೆಂ.ಮ.ನ.ಸಾ.ಸಂಸ್ಥೆ ದಿನಾಂಕ 15-08-1997ರಂದು ಅಸ್ತಿತ್ವಕ್ಕೆ ಬಂದಿದ್ದು ಬೆಂಗಳೂರು ನಗರದ ನಗರ ಸಾರಿಗೆ ಬೇಡಿಕೆಯನ್ನು ಪೂರೈಸಲಾಗುತ್ತಿದೆ. ದಿನಾಂಕ 01-11-1997ರಂದು ವಾ.ಕ.ರ.ಸಾ.ಸಂಸ್ಥೆ ಅಸ್ತಿತ್ವಕ್ಕೆ ಬಂದಿದ್ದು, ರಾಜ್ಯದ ವಾಯವ್ಯ ಭಾಗದ ಜಿಲ್ಲೆಗಳ ಸಾರಿಗೆ ಬೇಡಿಕೆಗಳಿಗನುಗುಣವಾಗಿ ಸೇವೆಯನ್ನು ಒದಗಿಸುತ್ತಿದೆ. ಈ.ಕ.ರ.ಸಾ.ಸಂಸ್ಥೆಯನ್ನು ದಿನಾಂಕ 15-08-2000ರಂದು ಸ್ಥಾಪಿಸಲಾಯಿತು. ಅದರ ಕೇಂದ್ರ ಕಚೇರಿಯು ಗುಲ್ಬರ್ಗದಲ್ಲಿದ್ದು, ರಾಜ್ಯದ ಈಶಾನ್ಯ ಜಿಲ್ಲೆಗಳ ಸಾರಿಗೆ ಬೇಡಿಕೆಗಳಿಗನುಗುಣವಾಗಿ ಸೇವೆಯನ್ನು ಒದಗಿಸುತ್ತಿದೆ.

### ಪ್ರಸ್ತುತ ಸಂಸ್ಥೆಯನ್ನು ನಾಲ್ಕು ಸಂಸ್ಥೆಗಳಾಗಿ ವಿಭಜಿಸಿದ ನಂತರ ಪ್ರಮುಖಾಂಶಗಳ ವಿವರ ಈ ಕೆಳಕಂಡಂತಿದೆ:

ದಿನಾಂಕ 31-03-2019ರ ಅಂತ್ಯಕ್ಕೆ, ಸಂಸ್ಥೆಗಳು ಒಟ್ಟು 41 ವಿಭಾಗಗಳಲ್ಲಿ ಕಾರ್ಯಾಚರಿಸುತ್ತಿದೆ. ಅವುಗಳಲ್ಲಿ 34 ವಿಭಾಗಗಳು ಗ್ರಾಮಾಂತರ ಸಾರಿಗೆ ವಿಭಾಗಗಳಾಗಿದ್ದು, ಒಂದು ಬಸ್ ನಿಲ್ದಾಣ ವಿಭಾಗವಾಗಿದ್ದು, 6 ವಿಭಾಗಗಳು ಬೆಂಗಳೂರಿನಲ್ಲಿ ನಗರ ಸಾರಿಗೆ ಕಾರ್ಯಾಚರಣೆ ವಿಭಾಗಗಳಾಗಿರುತ್ತವೆ. 232 ಘಟಕಗಳು, 7 ಪ್ರಾದೇಶಿಕ ಕಾರ್ಯಾಗಾರಗಳು ಮತ್ತು ನಾಲ್ಕು ಕೇಂದ್ರ ಕಚೇರಿಯನ್ನು ಹೊಂದಿದ್ದು, 540 ಬಸ್ ನಿಲ್ದಾಣಗಳು ಹೊಂದಿರುತ್ತದೆ. 116756 ಸಿಬ್ಬಂದಿಯನ್ನು ಹೊಂದಿದ್ದು, ಪ್ರತಿ ಅನುಸೂಚಿಗೆ ಸಿಬ್ಬಂದಿ ಪ್ರಮಾಣ 4.99ರಷ್ಟಿದೆ. 23406 ಅನುಸೂಚಿಗಳನ್ನು 15815 ಮಾರ್ಗಗಳಲ್ಲಿ ಕಾರ್ಯಾಚರಿಸಲಾಗುತ್ತಿರುತ್ತದೆ ಹಾಗೂ ಸರಾಸರಿ ದೈನಂದಿನ ಪರಿಣಾಮಕಾರಿ ಕಿ.ಮೀ.ಗಳು 70.70 ಲಕ್ಷವಾಗಿರುತ್ತದೆ. ಅಂತರರಾಜ್ಯ ಮಾರ್ಗಗಳಲ್ಲಿ ಸಂಸ್ಥೆಯು ಪರಸ್ಪರ ಒಪ್ಪಂದದ

ಮೇಲೆ ನೆರೆಯ ರಾಜ್ಯಗಳಿಗೆ ಕಾರ್ಯಾಚರಿಸಲಾಗುತ್ತಿರುತ್ತದೆ. ಒಟ್ಟು 25064 ವಾಹನಗಳನ್ನು ಹೊಂದಿದ್ದು, ಸರಾಸರಿ ವಾಹನ ಉಪಯುಕ್ತತೆ 314 ಕಿ.ಮೀ.ಗಳಾಗಿರುತ್ತದೆ. ಪ್ರತಿ ದಿನ ಸರಾಸರಿ 99.71 ಲಕ್ಷ ಪ್ರಯಾಣಿಕರನ್ನು ಕೊಂಡೊಯ್ಯಲಾಗುತ್ತಿದೆ.

ಮುಂದುವರೆದು ಆಡಳಿತ ವಿಕೇಂದ್ರೀಕರಣದಿಂದಾಗಿ ಸಾರ್ವಜನಿಕ ಪ್ರಯಾಣಿಕರ ಸಾರಿಗೆ ಸಮಸ್ಯೆಗಳಿಗೆ ಕೂಡಲೇ ಸ್ಪಂದಿಸಿ ಉತ್ತಮ ಸಾರಿಗೆ ಸೇವೆ ನೀಡಲಾಗುತ್ತಿದೆ. ಹೆಚ್ಚಿನ ಸಾರಿಗೆಗಳನ್ನು ಗ್ರಾಮಾಂತರ ಪ್ರದೇಶಗಳಿಗೆ ಕಾರ್ಯಾಚರಿಸುತ್ತಿದ್ದು ಸಾರ್ವಜನಿಕ ಪ್ರಯಾಣಿಕರ ಹಾಗೂ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಸದರಿ ಗ್ರಾಮಾಂತರ ಸಾರಿಗೆಗಳನ್ನು ಕೇವಲ ಒಂದು ಬದಿಯ ದಟ್ಟಣೆ ಇದ್ದಾಗಿಯೂ ಕಾರ್ಯಾಚರಿಸಲಾಗುತ್ತಿದೆ. ಇನ್ನೂ ಹೆಚ್ಚಿನ ಸಾರಿಗೆ ಸೌಲಭ್ಯ ಕಲ್ಪಿಸುವ ನಿಟ್ಟಿನಲ್ಲಿ ಜನಪ್ರತಿನಿಧಿಗಳಿಂದ/ಸಾರ್ವಜನಿಕ ಪಯಾಣಿಕರಿಂದ ಬಂದ ಅಹವಾಲುಗಳಿಗೆ ಸ್ಪಂದಿಸಿ ಇನ್ನೂ ಹೆಚ್ಚಿನ ಸಾರಿಗೆ ಸೌಲಭ್ಯ ಕಲ್ಪಿಸುವ ನಿಟ್ಟಿನಲ್ಲಿ ಸಂಸ್ಥೆಗಳು ಬದ್ಧವಾಗಿದೆ.

ಒಟ್ಟಾರೆಯಾಗಿ ಸಂಸ್ಥೆಯನ್ನು 4 ಪ್ರತ್ಯೇಕ ಸಂಸ್ಥೆಯನ್ನಾಗಿ ವಿಭಜಿಸಿದ ನಂತರ ಸಾರ್ವಜನಿಕರಿಗೆ ವಿದ್ಯಾರ್ಥಿಗಳಿಗೆ ಹೆಚ್ಚಿನ ಸಾರಿಗೆ ಸೌಲಭ್ಯ ನೀಡಲು ಮತ್ತು ಪ್ರಯಾಣಿಕರ ಬೇಡಿಕೆಗಳಿಗೆ ಕೂಡಲೇ ಸ್ಪಂದಿಸಲು ಹೆಚ್ಚಿನ ಅನುಕೂಲವಾಗಿರುತ್ತದೆ.

* * * * *